ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ಕೈಗೊಂಡಿರುವ ಕ್ರಮಗಳ ಬಗ್ಗೆ

ಶ್ರೀ ಎಂ. ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

290 (326) ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 3 ವರ್ಷಗಳಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಹಾಸನ ಜಿಲ್ಲೆಗೆ ವಿವಿಧ ಯೋಜನೆಗಳಡಿ ಮಂಜೂರಾದ ಅನುದಾನವೆಷ್ಟು ; ಇದರಲ್ಲಿ ಬಿಡುಗಡೆಯಾದ ಅನುದಾನವೆಷ್ಟು; ಬಿಡುಗಡೆಯಾಗದೇ ಬಾಕಿ ಉಳಿದಿರುವ ಅನುದಾನವೆಷ್ಟು ; ಬಾಕಿ ಉಳಿಯಲು ಕಾರಣಗಳೇನು ; ಯಾವಾಗ ಬಿಡುಗಡೆ ಮಾಡಲಾಗುವುದು; (ವಿವರ ನೀಡುವುದು)

(ಆ) ಈ ಅನುದಾನದಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು ; ಈ ಕಾಮಗಾರಿಗಳ ಮೊತ್ತವೆಷ್ಟು ; ಕಾಮಗಾರಿಗಳನ್ನು ನಿರ್ವಹಿಸಿದ ಗುತ್ತಿಗೆದಾರರು ಯಾರು ; (ಕಾಮಗಾರಿ ಹೆಸರು, ಗ್ರಾಮ ಮತ್ತು ತಾಲ್ಲೂಕಿನ ವಿವರ ನೀಡುವುದು)

(ಇ) ಹಾಸನ ಜಿಲ್ಲೆಯಲ್ಲಿ ಅಲ್ಪಸಂಖ್ಯಾತರು ಹೆಚ್ಚಿನ ಸಂಖ್ಯೆಯಲ್ಲಿದ್ದು, ಮೂಲಭೂತ ಸೌಲಭ್ಯಗಳಿಲ್ಲದೆ ಅವರು ಹಿಂದುಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಅಲ್ಪಸಂಖ್ಯಾತರಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು ? (ವಿವರ ನೀಡುವುದು)